# ಭಾಷಾಬೋಧನೆ - ಒಂದು ಅನುಭವ

**ಛೋಟೇಲಾಲ್ ತನ್ವಾರ್**

***

ಭಾಷಾ ಬೋಧನೆ ಕುರಿತು ಮಾತಾಡಲು ಹೊರಟಾಗ ನಮ್ಮ ಮನದಲ್ಲಿ, ಭಾಷೆ ಅಂದರೆ ಏನು, ಅದನ್ನು ಕಲಿಯುವುದು ಹೇಗೆ ಮುಂತಾದ ಅನೇಕ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಹಾಗೂ ಅವುಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಪಟ್ಟಾಗ ಉದ್ಭವವಾಗುವ ಮುಖ್ಯ ವಿಚಾರವೆಂದರೆ ಭಾಷೆಯನ್ನು ಸಾಮಾನ್ಯವಾಗಿ ಅಭಿವ್ಯಕ್ತಿಯ ಒಂದು ಮಾಧ್ಯಮ ಎಂಬುದಾಗಿ ಅಥವಾ ಆಲೋಚನೆಗಳ ವಿನಿಮಯಕ್ಕಾಗಿ ಬಳಸಲಾಗುತ್ತದೆ ಎಂಬುದೇ ಆಗಿದೆ. ಇಂತಹ ಸೀಮಿತ ಅರ್ಥದಲ್ಲಿ ಭಾಷೆಯನ್ನು ನೋಡಿದಾಗ ಭಾಷಾ ಬೋಧನೆಯನ್ನು ಕುರಿತ ನಮ್ಮ ಪರಿಕಲ್ಪನೆಗಳೂ ಸೀಮಿತಗೊಳ್ಳುತ್ತವೆ. ಹೀಗೆ ವಿಷಯದ ಸ್ವರೂಪವನ್ನು ಕುರಿತ ನಮ್ಮ ಚಿಂತನೆಯೇ ಸೀಮಿತಗೊಂಡಾಗ ಅದು ಖಂಡಿತವಾಗಿಯೂ ಆ ವಿಷಯವನ್ನು ಬೋಧಿಸುವ ವಿಧಾನದ ಮೇಲೆಯೂ ಪರಿಣಾಮವನ್ನು ಬೀರುತ್ತದೆ. ಈ ಲೇಖನವು, ಹಲವು ವರ್ಷಗಳಿಂದ ನಡೆಯುತ್ತಿರುವ ಇದೇ ವಿಷಯವನ್ನು ಕುರಿತ ಚರ್ಚೆಯನ್ನು ಮುಂದುವರಿಸುತ್ತದೆ. ಅದು ಭಾಷಾ ಬೋಧನೆಯ ವಿಧಿ-ವಿಧಾನಗಳನ್ನು ಹಾಗೂ ಅದಕ್ಕೆ ಸಂಬಂಧಿಸಿದ ಇತರೆ ವಿಷಯಗಳನ್ನೂ ಪರಿಶೀಲಿಸುತ್ತದೆ. ಭಾಷಾ ಬೋಧನೆಯ ಸಂದರ್ಭದಲ್ಲಿ ಮಕ್ಕಳೊಡನೆ ನಾವು ಪಡೆದ ಅನುಭವಗಳನ್ನೂ ಇಲ್ಲಿ ಹೇಳುತ್ತೇವೆ.

ಭಾಷೆಯನ್ನು ಕಲಿಯುವ ಕೌಶಲಗಳನ್ನು ರೂಪಿಸುವುದರ ಉದ್ದೇಶ ಸಾಧನೆಯಲ್ಲಿನ ಪ್ರಯತ್ನಗಳ ಒಂದು ಹಿನ್ನೋಟವನ್ನು ನೀಡುವುದಷ್ಟೇ ಈ ಲೇಖನದ ಉದ್ದೇಶವಲ್ಲ; ಭಾಷೆಯ ಕಲಿಕೆಗೆ ತೊಡಕುಉಂಟು ಮಾಡುವುದಲ್ಲದೆ, ಭಾಷಾ ಕಲಿಕೆಯಿಂದಲೇ ಹಿಂಜರಿಯುವಂತೆ ಮಾಡುವ ಅಂಶಗಳ ಮೇಲೂ ಬೆಳಕು ಚೆಲ್ಲುವುದು ಉದ್ದೇಶವಾಗಿದೆ.

## ಓದಿಗೆ ಸಿದ್ಧಗೊಳಿಸಲು ಬೋಧನಾ ವಿಧಾನಗಳು

ಮಕ್ಕಳು ಪೂರ್ವ ಪ್ರಾಥಮಿಕ ಅಥವಾ ಒಂದನೇ ತರಗತಿಗೆ ಬಂದಾಗ ಅಕ್ಷರಮಾಲೆಯನ್ನು ಪರಿಚಯಿಸಿ ಓದಲು ಕಲಿಸಲಾಗುತ್ತದೆ. ಮಕ್ಕಳು ಅಕ್ಷರಮಾಲೆಯನ್ನು ಕಲಿತರಷ್ಟೇ ಓದುವ ಸಾಮರ್ಥ್ಯವನ್ನು ಪಡೆಯುತ್ತಾರೆ ಎಂಬ ಪರಿಕಲ್ಪನೆಯೇ ಈ ವಿಧಾನವನ್ನು ಅನುಸರಿಸಲು ಕಾರಣವಾಗಿದೆ. ಬದಲಾಗಿ ಮೂರು ವರ್ಷಗಳ ಮಗುವಿಗೆ ಒಂದು ಚಿತ್ರಗಳ ಪುಸ್ತಕ ಕೊಟ್ಟರೆ ಅದು ಆ ಪುಸ್ತಕವನ್ನು ಓದುತ್ತಿರುವಂತೆ ನಟಿಸುತ್ತದೆ. ಆದರೆ ಮಗುವಿನ ಈ ಪ್ರಯತ್ನವನ್ನು ಕೆಲವರು ಮಾತ್ರ ಗಮನಿಸುತ್ತಾರೆ.

## ಬರವಣಿಗೆಗೆ ಸಿದ್ಧಗೊಳಿಸುವುದು

ಮಗು ಅಕ್ಷರ ಮಾಲೆಯನ್ನು ಮತ್ತು ಕಾಗುಣಿತವನ್ನು ಸರಿಯಾಗಿ ತಿಳಿದುಕೊಂಡಾಗ ಮಾತ್ರ ಸರಾಗವಾಗಿ ಓದಲು ಶಕ್ತವಾಗುವುದು ಹಾಗೂ ಅನಂತರವಷ್ಟೆ ಅದಕ್ಕೆ ಬರೆಯಲು ಕಲಿಸಬೇಕಾಗುತ್ತದೆ ಎಂಬುದು ಸಾಮಾನ್ಯವಾದ ನಂಬಿಕೆ. ಚಿತ್ರ ಬರೆಯುವುದೂ ಬರವಣಿಗೆಯ ಭಾಗವೇ ಆಗಿದ್ದರೂ ಸಾಮಾನ್ಯವಾಗಿ ಪ್ರೌಢವಯಸ್ಕರಾದ ನಾವೆಲ್ಲರೂ ಚಿತ್ರ ಬರೆಯುವುದನ್ನು ಬರವಣಿಗೆಗೆ ತಯಾರಿ ಎಂದು ಭಾವಿಸುವುದೇ ಇಲ್ಲ.

## ಮಾತನಾಡುವ ಹಾಗೂ ಆಲಿಸುವ ಸಾಮರ್ಥ್ಯದ ಅಭಿವೃದ್ಧಿ

ಮಕ್ಕಳು ಹಿರಿಯ ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ ಹಾಗೂ ಕಾಲೇಜು ಮಟ್ಟಕ್ಕೆ ಹೋದಾಗ ಸಹಜವಾಗಿ ಓದಿ ಬರೆಯುವ ಸಾಮರ್ಥ್ಯವನ್ನು ಗಳಿಸಿಕೊಳ್ಳುತ್ತಾರೆ ಎಂಬ ಭಾವನೆ ವಯಸ್ಕರಲ್ಲಿ ಇದೆ. ಆದ್ದರಿಂದ ಎಳೆಯ ಮಕ್ಕಳಿಗೆ ಇದನ್ನು ಕಲಿಸಿಕೊಡುವುದಕ್ಕೆ ವಿಶೇಷ ಪ್ರಯತ್ನಗಳ ಅಗತ್ಯವಿಲ್ಲ ಎಂಬ ತೀರ್ಮಾನಕ್ಕೆ ಬರುತ್ತೇವೆ. ಭಾಷಾ ಕಲಿಕೆಯನ್ನು ಕುರಿತ ಈ ಮನೋಧರ್ಮದ ಪರಿಣಾಮವಾಗಿ ಶೈಕ್ಷಣಿಕ ಕಂದರವೊಂದು ನಿರ್ಮಾಣವಾಗುತ್ತದೆ, ಸರಿಯಾದ ವಿಧಾನದಲ್ಲಿ ಕಲಿಯುವುದಕ್ಕೂ ಇದರಿಂದ ಅಡ್ಡಿಯುಂಟಾಗುತ್ತದೆ ಮತ್ತು ಗ್ರಹಿಕಾಸಾಮರ್ಥ್ಯ ಗಳಿಸಲು ಬೇಕಾದ ತಾರ್ಕಿಕ ಬುನಾದಿಯನ್ನು ಇದು ರಚಿಸುವುದಿಲ್ಲ, ಮಕ್ಕಳ ಭಾಷೆಯ ಸಾಮರ್ಥ್ಯಗಳನ್ನು ಬೆಳೆಸುವ ವಿಷಯವನ್ನು ಹೀಗೆ ನಕಾರಾತ್ಮಕವಾಗಿ ಪರಿಗಣಿಸುವುದು ಅಥವಾ ಅದು ಸಮಗ್ರ ಕಲಿಕೆಯ ಒಂದು ಭಾಗ ಮಾತ್ರ ಎಂದು ತಿಳಿದು ಭಾಷಾಶಕ್ತಿಯ ಅಭಿವೃದ್ಧಿಯನ್ನು ವಿಳಂಬವಾಗಿ ಕೈಗೆತ್ತಿಕೊಳ್ಳುವುದು ಇಡೀ ಪ್ರಕ್ರಿಯೆಯ ಮೇಲೆಯೇ ನಕಾರಾತ್ಮಕ ಪರಿಣಾಮವನ್ನು ಬೀರುತ್ತದೆ. ಭಾಷಾ ಸಾಮರ್ಥ್ಯದ ಕಲಿಕೆಯನ್ನು ಸಮಗ್ರವಾಗಿ ಪರಿಗಣಿಸದೇ ಭಾಷೆಯ ಎಲ್ಲ ಕೌಶಲಗಳನ್ನೂ ಬೆಳೆಸುವ ಅಗತ್ಯವನ್ನು ಮನಗಾಣದೆ ಹೋದರೆ, ಓದಿ ಬರೆಯುವುದನ್ನು ಮುಂದೆ ಸಹಜವಾಗಿ ತಾವಾಗಿಯೇ ಕಲಿತುಕೊಳ್ಳುತ್ತಾರೆ ಎಂಬ ಧೋರಣೆ ತಳೆಯುತ್ತೇವೆ. ಇಂತಹ ಸನ್ನಿವೇಶದಲ್ಲಿ ಭಾಷೆಯ ಬೋಧನೆ ಹಾಗೂ ಕಲಿಕೆಯಲ್ಲಿ ಮೂಲಭೂತವಾದ ಸಮಸ್ಯೆಗಳು ಇರುವಂತೆ ಕಾಣಿಸುತ್ತದೆ. ಭಾಷಾ ಬೋಧನೆಯ ಉದ್ದೇಶಿತ ಗುರಿಗಳನ್ನು ಸಾಧಿಸಬೇಕಿದ್ದರೆ ಅವುಗಳನ್ನು ಸರಿಪಡಿಸುವ ಅಗತ್ಯವಿದೆ.

ಟೋಂಕ್ನ ಅಜೀಂ ಪ್ರೇಮ್ ಜಿ ಶಾಲೆಯಲ್ಲಿ, ಮೇಲೆ ಪ್ರಸ್ತಾವಿಸಲಾದ ಎಲ್ಲ ವಿಷಯಗಳನ್ನೂ ಪರಿಗಣನೆಗೆ ತೆಗೆದುಕೊಳ್ಳಲಾಗಿದೆ. ಇದರ ಜತೆಗೆ ಮಕ್ಕಳ

ಜತೆಗಿನ ವ್ಯವಹಾರದಲ್ಲಿ ಭಾಷಾ ಕಲಿಕೆಗೆ ಸಂಬಂಧಿಸಿದ ಎಲ್ಲ ಸೈದ್ಧಾಂತಿಕ ಆಯಾಮಗಳನ್ನೂ ಅಳವಡಿಸಿಕೊಳ್ಳಲಾಗಿದೆ. ಇದರೊಂದಿಗೆ ಈ ಭಾಷಾ ಕಲಿಕೆಯ ಸೈದ್ಧಾಂತಿಕ ಆಯಾಮಗಳು ಮಕ್ಕಳೊಂದಿಗೆ ಕಾರ್ಯ ನಿರ್ವಹಿಸುವಾಗ ಪ್ರತಿಪಾದಿತವಾಗುತ್ತವೆ. ಇದರಿಂದಾಗಿ ಅಲ್ಲಿನ ಶಿಕ್ಷಕ / ಶಿಕ್ಷಕಿಯರು ಉತ್ಸಾಹವನ್ನು ಪಡೆದುಕೊಂಡು ತಮ್ಮ ಕೆಲಸಗಳಲ್ಲಿ ಇನ್ನಷ್ಟು ಗಾಢವಾಗಿ ತೊಡಗಿಸಿಕೊಳ್ಳಲು ಸಾಧ್ಯವಾಗಿದೆ. ಈಗ ವಿಷಯವನ್ನು ಹೀಗೆ ನೋಡೋಣ- ನಾವು ಭಾಷೆಯನ್ನು ಬರೇ ಅಭಿವ್ಯಕ್ತಿಯ ಮಾಧ್ಯಮ ಎನ್ನುವುದಿಲ್ಲ, ನಾವು ಯೋಚಿಸುವುದು, ವಾದಿಸುವುದು, ಕಲ್ಪನೆ ಮಾಡಿಕೊಳ್ಳುವುದು ಹಾಗೂ ವಿಷಯ-ವಸ್ತುಗಳನ್ನು ಅರಿತುಕೊಳ್ಳುವುದು- ಎಲ್ಲವೂ ಭಾಷೆಯ ಮೂಲಕವೇ ಎಂಬುದು ನಮ್ಮ ವಿಶ್ವಾಸ. ನಾವು ನಮ್ಮನ್ನು ನಮ್ಮ ಸುತ್ತಲಿನ ಸಕಲ ಜೀವರಾಶಿಯೊಂದಿಗೆ, ಜನಜೀವನದೊಂದಿಗೆ, ವಸ್ತುಗಳೊಂದಿಗೆ ಗುರುತಿಸಿಕೊಳ್ಳುತ್ತೇವೆ. ಭಾಷೆಯನ್ನು ಈ ದೃಷ್ಟಿಕೋನದಿಂದ ನೋಡುವುದು ನಮಗೆ ಹೊಸ ಅರ್ಥವನ್ನು ಕೊಡುತ್ತದೆ. ಹಾಗೆಯೇ ನಮಗೆ ಮಕ್ಕಳನ್ನು ಕಲಿಕೆಯಲ್ಲಿ ತೊಡಗಿಸಲು ಏಕತಾನೀಯವೆನಿಸುವ ಅಕ್ಷರಮಾಲೆಯ ಕಲಿಕೆಯಿಂದ ಪ್ರಾರಂಭಿಸುವುದು ಸರಿಕಾಣಿಸುವುದಿಲ್ಲ.

ಒಂದನೇ ತರಗತಿಯ ಮಕ್ಕಳಿಗೆ ಹಿಂದಿ ಭಾಷಾ ಬೋಧನಾ ಅನುಭವಗಳು ಮತ್ತು ಅವರಲ್ಲಿ ಭಾಷೆಯ ಬೆಳವಣಿಗೆ

ಒಂದನೇ ತರಗತಿಯ ಮಕ್ಕಳ ಆಲಿಸುವಿಕೆ ಮತ್ತು ಮಾತನಾಡುವ ನೈಪುಣ್ಯವನ್ನು ಬೆಳೆಸಲು ಕೈಗೊಂಡ ಚಟುವಟಿಕೆಗಳು. ೧೫-೨೦ ಶಿಶುಗೀತೆಗಳ ಸಂಗ್ರಹ, ಮಕ್ಕಳಿಗೆ ಅವುಗಳ ಬೋಧನೆ- ತರಗತಿಯು ಮಕ್ಕಳನ್ನು ವೃತ್ತಾಕಾರವಾಗಿ ಕೂರಿಸಿ ಶಿಶುಗೀತೆ ಹಾಡುವುದರಿಂದ ಪ್ರಾರಂಭವಾಯಿತು. ಶಿಕ್ಷಕಿ ಗೀತೆಯನ್ನು ಆಂಗಿಕ ಅಭಿನಯದ ಜತೆಗೆ ಹಾಡಿದರು. ಮಕ್ಕಳು ಅದನ್ನು ಪುನರಾವರ್ತಿಸಿದರು. ಎರಡು-ಮೂರು ದಿನಗಳಲ್ಲಿ ಮಕ್ಕಳು ಹಾಡನ್ನು ಸಾಕಷ್ಟು ಕಲಿತ ಮೇಲೆ ಹಾಡನ್ನು ಚಾರ್ಟ್‌ನಲ್ಲಿ ಮೇಲೆ ಬರೆದು ಮಕ್ಕಳಿಗೆ ಕಾಣುವ ಮಟ್ಟದಲ್ಲಿ ಇರಿಸಲಾಯಿತು. ಈಗ ಹಾಡು ಹಾಡುವ ಜತೆಗೇ ಬೆರಳಿನಿಂದ ಅಥವಾ ಕೋಲಿನಿಂದ ಚಾರ್ಟಿನ ಮೇಲೆ ಬರೆದ ಆಯಾ ಪದವನ್ನು ಮುಟ್ಟುತ್ತಾ ಮಕ್ಕಳಿಗೆ ಓದಿ ಹೇಳಿ ಪರಿಚಯಿಸಲಾಯಿತು. ಹೀಗೆ ಅಭ್ಯಾಸ ನಡೆಸಲಾಯಿತು.

ಕೆಲವು ಮಕ್ಕಳು ಗೀತೆಯನ್ನು ಪೂರ್ತಿ ಕಲಿತರು. ಅವರಿಗೆ ಚಾರ್ಟಿನ ಮೇಲಿನ ಪದಗಳನ್ನು ಮುಟ್ಟಿ ತೋರಿಸುತ್ತಾ ಹಾಡುವುದು / ಓದುವುದು ಮತ್ತು ಉಳಿದ ಮಕ್ಕಳು ಅದನ್ನು ಪುನಾರವರ್ತಿಸುವಂತೆ ಮಾಡಲಾಯಿತು. ಮಕ್ಕಳೇ ಹಾಡುತ್ತಾ ಚಾರ್ಟಿನಲ್ಲಿರುವ ಪದಗಳನ್ನು ಮುಟ್ಟುತ್ತಾ ಲಯಬದ್ಧವಾಗಿ ಹಾಡುವ ಪ್ರಕ್ರಿಯೆಯಲ್ಲಿ ಓದುವಿಕೆಯ ಸೂಕ್ಷ್ಮ ವ್ಯತ್ಯಾಸಗಳನ್ನು ಅರ್ಥಮಾಡಿಕೊಳ್ಳತೊಡಗಿದರು. ಉದಾಹರಣೆಗೆ, ಅವರು ಇಡೀ ಒಂದು ಸಾಲನ್ನು ಎಡದಿಂದ ಬಲಕ್ಕೆ, ಓದುತ್ತಿದ್ದರು, ಪದದ ಶಾಬ್ದಿಕ ರೂಪವೂ

ಉಚ್ಚಾರಣೆಯ ಸಮರ್ಪಕ ರೂಪವನ್ನೂ ತಿಳಿದುಕೊಂಡದ್ದಲ್ಲದೆ, ಓದೆಂಬುದು ಮೇಲಿಂದ ಕೆಳಗೆ ವ್ಯವಸ್ಥಿತವಾಗಿ ಸಾಗುತ್ತಿತ್ತು.

ಅದರ ಜೊತೆಗೆ, ಪದಗಳನ್ನು ಪರಿಚಯಿಸುತ್ತಾ ಮಕ್ಕಳನ್ನು ಓದಿನ ಆರಂಭದ ಕ್ರಿಯೆಗೆ ಒಳಪಡಿಸಿಕೊಳ್ಳುವುದು ಓದಲು ಸಹಾಯವಾಗುವುದು. ಮಕ್ಕಳಿಗೆ ಎಳವೆಯಲ್ಲೇ ಹೀಗೆ ಓದಿನ ಅಭ್ಯಾಸಕ್ಕೆ ತೆರೆದುಕೊಂಡರೆ ಅವರ ಆತ್ಮವಿಶ್ವಾಸವು ಬಲಗೊಳ್ಳುವುದು ಮತ್ತು ಮಕ್ಕಳ ಆತ್ಮವಿಶ್ವಾಸವು ಹೀಗೆ ನಿರ್ಧರಿಸುತ್ತಿರುವುದನ್ನು ಶಿಕ್ಷಕರೂ ನೋಡಬಹುದು. ಓದುವುದನ್ನು ಕಲಿಯಲು ಇದೊಂದು ಪವಾಡ ಸದೃಶ ವಿಧಾನ ಎಂದೇ ನಾವು ಭಾವಿಸಿದೆವು. ಏಕೆಂದರೆ ಆರು ವರ್ಷದ ಮಗುವೊಂದು ಶಿಶುಗೀತೆಗಳ ಸಹಾಯದಿಂದ ಮೂರು ತಿಂಗಳಲ್ಲೇ ಓದಲು ಕಲಿತುದನ್ನು ನಾವು ನೋಡಿದೆವು.

ಶಿಶು ಗೀತೆಗಳೊಂದಿಗೆ ೧೮-೨೦ ಕತೆಗಳನ್ನು ಆಯ್ಕೆಮಾಡಿ ಮಕ್ಕಳು ಅವುಗಳನ್ನು ಕಲಿಯುವಂತೆ ಮಾಡಿದೆವು. ಪ್ರಾರಂಭದಲ್ಲಿ ಮಕ್ಕಳು ಈ ಕತೆಗಳನ್ನು ಕೇಳಿಸಿಕೊಳ್ಳುವಂತೆ ಮಾಡಿ ಆಮೇಲೆ ಕತೆಗಳನ್ನು ಚಿತ್ರಗಳ ಮೂಲಕ ಹೇಳುವ ಚಟುವಟಿಕೆ ಕೈಗೊಂಡೆವು. ಈ ಪ್ರಕ್ರಿಯೆ ನಡೆಯುತ್ತಿರುವಂತೆಯೇ ಮಕ್ಕಳೊಡನೆ ಅವರ ಪರಿಚಯದ ಸ್ಥಳಗಳು, ವಸ್ತುಗಳು ಹಾಗೂ ಅನುಭವಗಳ ಬಗ್ಗೆ ಮಾತನಾಡಿದೆವು. ಈ ಮೂಲಕ ಅವರಿಗೆ ಮಾತನಾಡುವುದಕ್ಕೆ ಅವಕಾಶಗಳನ್ನು ಒದಗಿಸಿದೆವು.

ಮಕ್ಕಳು ಕತೆಗಳನ್ನು ಆಸಕ್ತಿಯಿಂದ ಕೇಳಲು ತೊಡಗಿದಾಗ ನಾವು ಆ ಕತೆಗಳನ್ನು ಕುರಿತು ಮಕ್ಕಳೊಡನೆ ಮಾತನಾಡಲು ಪ್ರಾರಂಭಿಸಿದೆವು. ನಾನಿಲ್ಲಿ ಅವರೊಡನೆ ನಡೆಸಿದ ಮಾತುಕತೆಯ ಒಂದು ಮಾದರಿಯನ್ನು ನೀಡಬಯಸುತ್ತೇನೆ. ಒಂದು ಕತೆಯ ಶೀರ್ಷಿಕೆ ಹೀಗಿತ್ತು- 'ಮೀಟಾ ಕೇ ಜಾದೂಯಿಜೂತೇ' (ಮೀಟಾಳ ಮಾಂತ್ರಿಕ ಚಪ್ಪಲಿ) ನಾವು ಕೇಳಿದ ಕೆಲವು ಪ್ರಶ್ನೆಗಳು ಹೀಗಿದ್ದವು:

-ನಿಮಗೆ ಕತೆ ಇಷ್ಟವಾಯಿತೇ?

-ಕತೆ ಚೆನ್ನಾಗಿತ್ತು.

-ಇದರಲ್ಲಿ ಯಾರು ನಿಮಗೆ ಇಷ್ಟವಾದರು?

-ಮೀಟಾ.

-ಕತೆಯಲ್ಲಿ ನಿಮಗೆ ಬೇರೆ ಏನು ಇಷ್ಟವಾಯಿತು?

-ರೆಕ್ಕೆಗಳು ಇರುವ ಮಾಂತ್ರಿಕ ಚಪ್ಪಲಿ.

-ನಿಮಗೆ ಆ ಹಾರುವ ಚಪ್ಪಲಿ ಸಿಕ್ಕರೆ ಎಲ್ಲಿಗೆ ಹೋಗಲು ಇಷ್ಟಪಡುವಿರಿ?

ಎಲ್ಲ ಮಕ್ಕಳೂ ಆಸಕ್ತಿಕರವಾದ ಉತ್ತರಗಳನ್ನು ಕೊಟ್ಟರು. ಕೆಲವು ಮಕ್ಕಳು ತಮ್ಮ ತಂದೆ ಕೆಲಸ ಮಾಡುವಂತಹ ದೆಹಲಿ, ಜೈಪುರ, ಸೌದಿ ಅರೇಬಿಯಾ ಅಥವಾ ಕೋಟಾ ಮುಂತಾದ ಸ್ಥಳಗಳಿಗೆ ಹೋಗುವುದಾಗಿ ಹೇಳಿದರು. ಕೆಲವರು ಅವರ ಅಜ್ಜಿಯ ಮನೆಗೆ ಮತ್ತೆ ಕೆಲವರು ಚಿಕ್ಕಮ್ಮ ದೊಡ್ಡಮ್ಮನ ಮನೆಗೆ ಹೋಗುವುದಾಗಿ ಹೇಳಿದರು. ನಾವು ಮಕ್ಕಳ ಭಾವಪ್ರಪಂಚವನ್ನು ಪ್ರವೇಶಿಸಿ ಅವರಿಗೆ ಅಭಿವ್ಯಕ್ತಿಯ ಮುಕ್ತ ಸ್ವಾತಂತ್ರ್ಯವನ್ನು ನೀಡಿದಾಗ ಅವರು ಅನೇಕ ವಿಷಯಗಳನ್ನು ಹೇಳುತ್ತಾರೆ. ಆರು ವರ್ಷದ ಮಕ್ಕಳ ಆಲಿಸುವಿಕೆ ಮತ್ತು ಮಾತನಾಡುವ ಕೌಶಲವನ್ನು ಬೆಳೆಸುವುದು ಅಸಾಧ್ಯ ಎಂಬವಾದ ಸರಿಯಲ್ಲ. ಮಕ್ಕಳ ಆಲಿಸುವಿಕೆ ಮತ್ತು ಅಭಿವ್ಯಕ್ತಿ, ಅವರ ಓದು ಮತ್ತು ಬರಹಗಳ ಕೌಶಲಗಳನ್ನು ಬೆಳಸಲು ಈ ವಯೋಮಾನದಲ್ಲಿಯೇ ಗಮನ ನೀಡಬೇಕು ಎಂಬುದು ನಮ್ಮ ನಿಲುವು; ಇಲ್ಲವಾದರೆ ಆ ಮಕ್ಕಳು ಬೆಳೆಯುತ್ತಾ ಮೌನಕ್ಕೆ ಸರಿಯುತ್ತಾ ಹೋಗುತ್ತಾರೆ; ಹಲವು ಸಂದರ್ಭಗಳಲ್ಲಿ ಅದು ಶಾಶ್ವತ ಮೌನವಾಗಿಯೂ ಪರಿಣಮಿಸಬಹುದು.

ನಾವು ಅನುಸರಿಸಿದ ಮಾದರಿ ಹೀಗಿದೆ- ಮಕ್ಕಳಿಗೆ ಶಿಶುಗೀತೆಗಳನ್ನೂ ಕತೆಗಳನ್ನು ಹೇಳಿಕೊಡುವುದು, ಅವುಗಳನ್ನು ಅಭಿನಯಿಸಿ ತೋರಿಸುವುದು, ಚಿತ್ರಗಳ ಮೂಲಕ ವಿವರಿಸುವುದು, ಪದಗಳನ್ನು ಮುಟ್ಟಿ ತೋರಿಸುತ್ತಾ ಓದುವುದು, ಶಿಶುಗೀತೆಗಳ ಹಾಗೂ ಕತೆಗಳ ಪ್ರಮುಖ ಪದಗಳನ್ನು ಓದುವುದು, ಶಿಶು ಪ್ರಾಸಗಳನ್ನು ವಿವಿಧ ಧಾಟಿಗಳಲ್ಲಿ ಹಾಡುವುದು ಇತ್ಯಾದಿ. ಈ ಅನುಭವದಿಂದ ಕಂಡುಬಂದದ್ದೇನೆಂದರೆ, ಈ ವಿಧಾನದಿಂದ ಮೂರರಲ್ಲಿ ಎರಡು ಭಾಗ ಮಕ್ಕಳು ವರ್ಷಾಂತ್ಯದ ವೇಳೆಗೆ ಸರಾಗವಾಗಿ ಓದುವುದನ್ನು ಕಲಿತರು. ಆ ಮೂಲಕ ವಾರ್ಷಿಕ ಪರೀಕ್ಷೆಗೆ ಸಿದ್ದರಾದರು. ಮಕ್ಕಳ ಈ ಸಾಧನೆಯ ಒಂದು ವಿಶೇಷವೆಂದರೆ ಅವರು ಪದಗಳನ್ನು ಬಿಡಿ ಅಕ್ಷರಗಳಾಗಿ ಒಡೆಯದೆ ಸರಾಗವಾಗಿ ಪದಗಳನ್ನು ಸೇರಿಸಿಕೊಂಡು ಇಡೀ ವಾಕ್ಯಗಳನ್ನು ತಡವರಿಸದೆ ಓದುತ್ತಿದ್ದರು.  ಹೀಗೆ ಕತೆಗಳನ್ನೂ ಪದ್ಯಗಳನ್ನೂ ಓದುವುದು ಅರ್ಥಮಾಡಿಕೊಂಡು ಓದುವ ಸಾಮರ್ಥ್ಯವನ್ನು ತಂದುಕೊಡುವುದಲ್ಲದೆ ಇನ್ನಷ್ಟು ಪುಸ್ತಕಗಳನ್ನು ಓದಲು ಪ್ರೇರೇಪಣೆ ನೀಡುತ್ತದೆ. ಇಂತಹ ಮಕ್ಕಳು ಮುಂದೆ ಉತ್ತಮ ಓದುಗರಾಗುತ್ತಾರೆ.

ಇದಲ್ಲದೆ ೩೦-೩೫ ಶಿಶು ಗೀತೆಗಳೂ ೧೫-೨೦ ಕತೆಗಳೂ ಮಕ್ಕಳಿಗೆ ಪರಿಚಯವಾದಾಗ ಅವುಗಳನ್ನು ತಮ್ಮದೇ ಭಾಷೆಯಲ್ಲಿ ಹಾಗೂ ತಮ್ಮದೇ ಧಾಟಿಯಲ್ಲಿ ಹೇಳುವ ಸಾಮರ್ಥ್ಯವನ್ನು ಅವರು ಪಡೆದುಕೊಳ್ಳುತ್ತಾರೆ. ಅವುಗಳನ್ನು ಅಭಿನಯಿಸಿ ತೋರಿಸುವ ಶಕ್ತಿಯೂ ಅವರಿಗೆ ಬರುತ್ತದೆ.

ಇದೀಗ ಎರಡು ವರ್ಷಗಳ ಅನಂತರ ನಾನು ಅವರಲ್ಲಿ ಕೆಲವರನ್ನು ಮಾತನಾಡಿಸಿದಾಗ ಒಂದು ಹಂತದ ಆಳವಾದ ಭಾಷಾ ಜ್ಞಾನ ಅವರಲ್ಲಿರುವುದು ಕಂಡುಬಂತು. ಇದರರ್ಥ ಸಾಧನೆಗೆ ಸಂಪೂರ್ಣವಾಗಿ ಒಂದನೇ ತರಗತಿಯಲ್ಲಿ ನಡೆದ ತರಬೇತಿಯೇ ಕಾರಣ ಎಂದಲ್ಲ. ಆದರೆ ಒಂದನೇ ತರಗತಿಯಲ್ಲಿ ಮಕ್ಕಳಿಗೆ ದೊರೆತ ತಾಲೀಮು ಅವರಿಗೆ ಖಂಡಿತವಾಗಿ ಹೆಚ್ಚಿನ ಭಾಷಾ ಪರ ಅನುಭವವನ್ನು ನೀಡಿದೆ ಎಂಬುದೇ ನನ್ನಭಾವನೆ.

೧೫-೨೦ ಕತೆ ಪುಸ್ತಕಗಳನ್ನು ಆಲಿಸಿ, ಓದಿ ಅನುಭವಿಸಿದ ಎರಡನೇ ತರಗತಿಯ ಮಕ್ಕಳು ತಾವಾಗಿಯೇ ಇನ್ನಷ್ಟು ಕತೆ ಪುಸ್ತಕಗಳ ಕಡೆಗೆ ಆಕರ್ಷಿತರಾಗುತ್ತಾರೆ. ಈ ಪ್ರವೃತ್ತಿಯನ್ನು ನಾವು ಸ್ವತಃ ಕೆಲವು ಮಕ್ಕಳಲ್ಲಿ ಕಂಡಿದ್ದೇವೆ.

## ಸವಾಲುಗಳು ಮತ್ತು ಸಾಧನೆಗಳು

ಕೆಲವು ಮಕ್ಕಳು ವಿವಿಧ ಕಾರಣಗಳಿಗಾಗಿ ಓದುವ ಸಾಮರ್ಥ್ಯಗಳಿಸಲು ಅಶಕ್ತರಾದರು, ಆದರೆ ಅವರು ಯಾವುದೇ ಭಾಷೆಯ ಕಲಿಕೆಯಲ್ಲಿ ಮಹತ್ತ್ವವಾದ ಆಲಿಸುವ ಮತ್ತು ಮಾತನಾಡುವ ಅಸಾಧರಣ ಸಾಮರ್ಥ್ಯವನ್ನು ಗಳಿಸಿಕೊಂಡರು. ಇದರರ್ಥ ಅವರು ಏನೂ ಕಲಿಯಲೇ ಇಲ್ಲ ಎಂದಲ್ಲ. ಅವರು ಭಾಷಾ ಕಲಿಕೆಯ ಮೂಲ ಕೌಶಲಗಳನ್ನು ಕಲಿತಿದ್ದಾರೆ, ಇಷ್ಟು ಸಾಮರ್ಥ್ಯವನ್ನು ಹೊಂದಲು ಹಿರಿಯ ಪ್ರಾಥಮಿಕ ಶಾಲೆಯ ಮಕ್ಕಳೇ ಪರದಾಡುವಾಗ ಈ ಮೂಲಕೌಶಲಗಳು ಭಾಷೆಯ ಕಲಿಕೆಯಲ್ಲಿ ಬಲು ಮಹತ್ತ್ವವಾದವುಗಳು.

***

**ಛೋಟೇಲಾಲ್ ತನ್ವಾರ್:** ಇವರು ೨೦೧೧ ರ ಆಗಸ್ಟ್ ನಿಂದ ಅಜೀಂ ಪ್ರೇಮ್ ಜಿ ಫೌಂಡೇಷನ್ ನಲ್ಲಿ ಸೇವೆಯಲ್ಲಿದ್ದಾರೆ. ಇದಕ್ಕೆ ಮುನ್ನ ಆಲ್ವಾರ್ ಜಿಲ್ಲೆಯ ಬೋಧ್ ಶಿಕ್ಷಾ ಸಮಿತಿಯಲ್ಲಿ ಹನ್ನೊಂದು ವರ್ಷಕಾಲ ಸಂಯೋಜಕರಾಗಿಯೂ ಸುಗಮಕಾರರಾಗಿಯೂ ಕೆಲಸಮಾಡಿದ್ದರು. ಅಲ್ಲಿ ಅವರು ಸುಮಾರು ೧೫ ಶಾಲೆಗಳನ್ನು ಉತ್ತಮ ಶಾಲೆಗಳಾಗಿ ಅಭಿವೃದ್ಧಿಪಡಿಸಲು ಶಿಕ್ಷಕರು, ವಿದ್ಯಾರ್ಥಿಗಳು ಹಾಗೂ ಸಮುದಾಯಗಳೊಂದಿಗೆ ನಿಕಟವಾಗಿ ಕಾರ್ಯನಿವಹಿಸಿದರಲ್ಲದೆ ಹಿಂದಿ ಹಾಗೂ ಗಣಿತದಲ್ಲಿ ಸಂಪನ್ಮೂಲ ವ್ಯಕ್ತಿಯಾಗಿಯೂ ಕೆಲಸ ಮಾಡಿದರು. ಅದಕ್ಕೂ ಮೊದಲು, ರಾಜಸ್ಥಾನ ಸರ್ಕಾರ ಮುಖ್ಯವಾಗಿ ಗ್ರಾಮೀಣ ಪ್ರದೇಶದಲ್ಲಿ ಜಾರಿಗೆ ತಂದ ಪ್ರಖ್ಯಾತ ಪ್ರಾಯೋಗಿಕ ಕಾರ್ಯಕ್ರಮವಾದ ಲೋಕ್ ಜುಂಬಿಶ್ ನಲ್ಲಿ ಲಸಮಾಡಿದ್ದರು. ಅವರ ಸಂಪರ್ಕಕ್ಕೆ: chhote.lal@azimpremjifoundation.org